## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : (474) 346
2. ಸದಸ್ಯರ ಹೆಸರು : ಶ್ರೀ ಆರ್. ಧರ್ಮಸೇನ
3. ಉತ್ತರಿಸುವ ದಿನಾಂಕ: : 04-02-2021
4. ಉತ್ತರಿಸುವವರು : ಮುಖ್ಯಮಂತ್ರಿಯವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬಿಬಿಎಂಪಿ ವ್ಯಾಪ್ತಿಯ ಜನವಸತಿ ಪ್ರದೇಶಗಳಲ್ಲಿ ಕೆಲವು ಮಾಲೀಕರು ಖಾಲಿ ನಿವೇಶನಗಳನ್ನು ಇಟ್ಟುಕೊಂಡಿದ್ದು, ಅಲ್ಲಿ ಜನರು ಕಸ ಕಡ್ಡಿಗಳನ್ನು ಹಾಕಿ ಮಲೀನ ವಾತಾವರಣ ನಿರ್ಮಾಣ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿಲ್ಲವೇ; | ಬಂದಿದೆ. |
| ಆ) | ಖಾಲಿ ನಿವೇಶನದಲ್ಲಿ ಸಂಗ್ರಹವಾಗಿರುವ ಕಸ ಕಡ್ಡಿಗಳು ಮಳೆ ಬಂದಾಗ ನೆನೆದು ಕೊಳೆತು ಅಕ್ಕಪಕ್ಕ ವಾಸ ಮಾಡುತ್ತಿರುವ ಮನೆಗಳ ನಿವಾಸಿಗಳಿಗೆ ದುರ್ವಾಸನೆ ಬರುತ್ತಿರುವುದಲ್ಲದೆ ಕಾಯಿಲೆಗಳಿಗೆ ತುತ್ತಾಗುವ ಅವಕಾಶ ಇರುವುದರಿಂದ ಇದನ್ನು ಸ್ವಚ್ಛಗೊಳಿಸುವಂತೆ ಮಾಲೀಕರಿಗೆ ನೋಟೀಸ್ ನೀಡಲು ಕ್ರಮ ಕೈಗೊಳ್ಳಲಾಗುವುದೇ; | ಖಾಲಿ ನಿವೇಶನಗಳ ಮಾಲೀಕರನ್ನು ಬಿ.ಬಿ.ಎಂ.ಪಿ.ಯ ಕಂದಾಯ ಇಲಾಖೆಯಿಂದ ಗುರುತಿಸಿ, ಈ ತರಹದ ನಿವೇಶನಗಳಲ್ಲಿ ಸ್ವಚ್ಛತೆಯನ್ನು ಕಾಪಾಡದೇ ಇರುವ ಮಾಲೀಕರುಗಳಿಗೆ ನೋಟೀಸನ್ನು ನೀಡಲು ಕ್ರಮವನ್ನು ಕೈಗೊಳ್ಳಲಾಗುವುದು; ಹಾಗೂ ಈ ತರಹದ ನಿವೇಶನಗಳನ್ನು ಸದರಿ ಮಾಲೀಕರು ನೋಟೀಸ್ ನೀಡಿದರೂ ಸಹ ಸ್ವಚ್ಛತೆ ಮಾಡದೇ ಇದ್ದಲ್ಲಿ, ಅಂತಹ ನಿವೇಶನವನ್ನು ಪಾಲಿಕೆಯ ವತಿಯಿಂದಲೇ ಸ್ವಚ್ಛತೆ ಮಾಡಿ ಅದಕ್ಕೆ ಒಟ್ಟಾರೆಯಾಗಿ ತಗಲಿರುವ ವೆಚ್ಚವನ್ನು ನಿವೇಶನದ ಮಾಲೀಕರ ಮೇಲೆ ಕಂದಾಯ ರೂಪದಲ್ಲಿ ವಸೂಲಿ ಮಾಡಲು ಕ್ರಮ ಕೈಗೊಳ್ಳಲಾಗುವುದು. |
| ಇ) | ಕರೋನಾ ಮುಂತಾದ ಕಾಯಿಲೆ ಹರಡುತ್ತಿರುವುದರಿಂದ, ಇಂತ ಮಲೀನ ವಾತಾವರಣ ತಪ್ಪಿಸಿ ಸ್ವಚ್ಛ ವಾತಾವರಣ ಉಂಟು ಮಾಡಲು ಬಿ.ಬಿ.ಎಂ.ಪಿ. ಆರೋಗ್ಯ ಇಲಾಖೆ ಕೂಡಲೇ ಕ್ರಮ ಕೈಗೊಳ್ಳುವುದೇ; | ಸ್ವಚ್ಛತೆಯ ವಾತಾವರಣವನ್ನು ಉಂಟು ಮಾಡಲು ಬಿ.ಬಿ.ಎಂ.ಪಿ.ಯಿಂದ ಎಲ್ಲಾ ತರಹದ ಸೂಕ್ತ ಕ್ರಮಗಳನ್ನು ಕೈಗೊಳ್ಳಲಾಗುವುದು. |

**ಸಂಖ್ಯೆ : ನಅಇ 23 ಬಿಬಿಎಲ್ 2021**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ.